Scutol ಗೊ ಕಯಾಂತ್ರಿ ಅಂ 22/9/2021

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1283
ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 22-09-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸ್ವಾತಂತ್ರ್ಯ ಮುನ್ನ ಬ್ರಿಟಿಷ್ ಆಳ್ವಿಕೆ ಅವಧಿಯಲ್ಲಿ ಲೀಜ್ ಆಧಾರದ ಮೇಲೆ ನೀಡಲಾಗಿದ್ದ ಜಮೀನಿನ ಅವಧಿ ಮುಗಿದಿರುವ ಜಮೀನುಗಳನ್ನು ಸರ್ಕಾರದ ವಶಕ್ಕೆ ಪಡೆಯಲಾಗಿದೆಯೇ: ಇಲ್ಲದಿದ್ದಲ್ಲಿ, ಕಾರಣಗಳೇನು; | ರಾಜ್ಯದ ಎಲ್ಲಾ ಜಿಲ್ಲೆಗಳ ಪೈಕಿ ಕೊಡಗು ಜಿಲ್ಲೆಯಲ್ಲಿ ಸ್ವಾತಂತ್ರ್ಯಕ್ಕೂ ಮುನ್ನ ಗುತ್ತಿಗೆ ಆಧಾರದಲ್ಲಿ ನೀಡಲಾಗಿದ್ದ ಜಮೀನಿನ ಗುತ್ತಿಗೆ ಅವಧಿ ಮುಕ್ತಾಯಗೊಂಡ ಜಮೀನುಗಳನ್ನು ಸರ್ಕಾರದ ವಶಕ್ಕೆ ಪಡೆಯಲಾಗಿರುತ್ತದೆ.<br><br>ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಖಾನಾಪುರ ಗ್ರಾಮದ ಸ.ನಂ.53/ಅ ರಲ್ಲಿ 5 ಗುಂಟೆ ಜಮೀನನ್ನು ವ್ಯವಸ್ಥಾಪಕರು, ಕ್ರೀಡಾ ಮಂಡಳ, ಖಾನಾಪುರ ಇವರಿಗೆ ದಿನಾಂಕ: 28.10.1933ರಂದು 50 ವರ್ಷಗಳ ಅವಧಿಗೆ ಗುತ್ತಿಗೆ ನೀಡಲಾಗಿತ್ತು. ಗುತ್ತಿಗೆ ಅವಧಿ ಮುಕ್ತಾಯಗೊಂಡ ನಂತರ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗಿದೆ. ಈ ಸಂಬಂಧ ಗುತ್ತಿಗೆದಾರರು ದಾಖಲಿಸಿರುವ ಪ್ರಕರಣವು ಉಪವಿಭಾಗಾಧಿಕಾರಿಯವರು, ಬೆಳಗಾವಿ ಇವರ ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ.<br><br>ಇದೇ ರೀತಿ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಕೊಣ್ಣೂರ ಗ್ರಾಮದಲ್ಲಿ 672-08 ಎಕರೆ/ಗುಂಟೆ ಮತ್ತು ಗೋಕಾಕ ಗ್ರಾಮದಲ್ಲಿ 312-10 ಎಕರೆ/ಗುಂಟೆ ಜಮೀನನ್ನು 90 ವರ್ಷಗಳ ಅವಧಿಗೆ ಗೋಕಾಕ್ ಫಾಲ್ಸ್ ಮಿಲ್ಸ್ ರವರಿಗೆ ಗುತ್ತಿಗೆ ನೀಡಲಾಗಿತ್ತು. ಸದರಿ ಗುತ್ತಿಗೆ ಅವಧಿಯು ದಿನಾಂಕ:28.05.1983ರಂದು ಮುಕ್ತಾಯಗೊಂಡಿತ್ತು. ಸದರಿ ಗುತ್ತಿಗೆಯನ್ನು ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 20 ಎಲ್‌ಜಿಎಲ್ 80, ದಿನಾಂಕ: 06.07.1983ರನ್ವಯ 50 ವರ್ಷಗಳ ಅವಧಿಗೆ ಮುಂದುವರೆಸಲಾಗಿದೆ.<br><br>ಉಳಿದ ಜಿಲ್ಲೆಗಳಲ್ಲಿ ಬ್ರಿಟಿಷ್ ಅವಧಿಯಲ್ಲಿ ಜಮೀನು ಗುತ್ತಿಗೆ ನೀಡಿರುವ ಪ್ರಕರಣಗಳು ಕಂಡುಬಂದಿರುವುದಿಲ್ಲ. |

| | | |
|---|---|---|
| ಆ) | ಸದರಿ ಜಮೀನುಗಳು ಇಂದು ನಗರ ಪಟ್ಟಣಗಳ ಮಧ್ಯೆ ಇದ್ದು, ಸರ್ಕಾರಕ್ಕೆ ದೊಡ್ಡ ಮಟ್ಟದ ಆಸ್ತಿಯಾಗಲಿದ್ದು, ಸದರಿ ಆಸ್ತಿಗಳನ್ನು ಕೂಡಲೇ ಸರ್ಕಾರದ ವಶಕ್ಕೆ ಪಡೆಯಲು ಸರ್ಕಾರ ಅನುಸರಿಸಬೇಕಾದ ಕ್ರಮಗಳೇನು; | ಅನ್ವಯಿಸುವುದಿಲ್ಲ. |
| ಇ) | ಒಂದುವೇಳೆ ಲೀಜ್ ಮುಂದುವರಿಸುವುದಾದಲ್ಲಿ, ಇಂದಿನ ಮಾರುಕಟ್ಟೆಯ ಮೌಲ್ಯ ನಿರ್ಧರಣೆಯನ್ನು ಬಿ.ಎಮ್.ಆರ್.ಸಿ.ಎಲ್ (ಬೆಂಗಳೂರು ಮೆಟ್ರೋ) ಮಾದರಿಯಲ್ಲಿ ಅನುಸರಿಸುವ ಬಗ್ಗೆ ಸರ್ಕಾರದ ಧೋರಣೆಗಳೇನು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಆರ್‌ಡಿ 166 ಎಲ್‌ಜಿಕ್ಯೂ 2021 (ಇ)

**(ಆರ್.ಅಶೋಕ)**
ಕಂದಾಯ ಸಚಿವರು